# ಚಿಗಟೇರಿ ಶಿವನಪ್ಪನಾಯಕನ (ಗುಣಾವಲೋಕನ)

—ಕುಂ. ಬಾ. ಸದಾಶಿವಪ್ಪ

ವಿಜಯನಗರ ಸಾಮ್ರಾಜ್ಯ ಹಾಳಾದ ಮೇಲೆ ಬಳ್ಳಾರಿ ಜಿಲ್ಲೆಯಲ್ಲಿ ಅವರ ಸಾಮಂತ ಅರಸರು ಕೆಲ ರಾಜ್ಯಗಳನ್ನು ಸ್ಥಾಪಿಸಿದರು. ಇವರಲ್ಲಿ ಪ್ರಮುಖರೆಂದರೆ ; ಹರಪನಹಳ್ಳಿ ನಾಯಕರು. ಇವರು ಸುಮಾರು ೩೦೦ ವರ್ಷಕ್ಕೂ ಹೆಚ್ಚು ಕಾಲ ರಾಜ್ಯವಾಳಿದರು. (ಕ್ರಿ.ಶ. ೧೫೬೬–೧೭೯೯).

ತೆಂಬ್ರಹಳ್ಳಿ ಓಬರನಾಯಕ ; ಕುರೇದಗುಡ್ಡೆ ಭರ್ಮಣ್ಣನಾಯಕ ; ವೀರದುರ್ಗದ ರಾಮಯ್ಯನಾಯಕ ; ಚಿಗಟೇರಿ ಶಿವನಪ್ಪನಾಯಕ ; ಬಾಗಳಿ ರಂಗಣ್ಣನಾಯಕ ಮುಂತಾದವರು ಹರಪನಹಳ್ಳಿ ನಾಯಕರಿಗೆ ಸಾಮಂತರಾಗಿದ್ದರು.

ಶಿವನಪ್ಪನೆಂಬ ಹೆಸರಿನ ತಳವಾರನು ಒಂದು ಬಾರಿ ಚಿಗಟೇರಿ ಗೌಡರಿಂದ ಒಂದು ಓಲೆಯನ್ನು ತೆಗೆದುಕೊಂಡು ಬಂದು ಹರಪನಹಳ್ಳಿ ಅರಸರಿಗೆ ಮುಟ್ಟಿಸಿದನು. ಆಗ ಅರಸನಾದ ಮೊದಲ ಬಸವಂತನಾಯಕನು ತನ್ನ ರಾಣಿ ಹರಿಯಮ್ಮಾಜಿಯ ಕೂಡ ಜೂಜಾಡುತ್ತಿದ್ದನು. ಅರಸನು ಜೂಜಾಟದಲ್ಲಿ ಸೋಲುವ ಹಂತದಲ್ಲಿದ್ದನು. ಆಗ ಅಲ್ಲಿಯೇ ರಾಣಿಯ ಹಿಂದುಗಡೆ ನಿಂತಿದ್ದ ಶಿವನಪ್ಪ ತಳವಾರನು ಅರಸನಿಗೆ ಸಂಜ್ಞೆ ಮಾಡಿದನು. ಇವನ ಸಂಜ್ಞೆಯನ್ನರಿತ ಅರಸ ಆಟವನ್ನು ಮುಂದುವರೆಸಿ, ಜೂಜಾಟದಲ್ಲಿ ರಾಣಿಯ ಮೇಲೆ ಜಯ ಪಡೆದನು. ಅರಸನಿಗೆ ಶಿವನಪ್ಪನ ಮೇಲೆ ಹೆಚ್ಚಿಗೆ ಪ್ರೀತಿಯುಂಟಾಯಿತು. ಅವನು ತಂದ ಓಲೆಯನ್ನು ಈಗ ವಿವರವಾಗಿ ಓದಿಕೊಂಡನು. ಕೂಡಲೇ ಮರು ಓಲೆಯನ್ನು ಚಿಗಟೇರಿಯ ಗೌಡರಿಗೆ ಬರೆದು ಅಂದಿನಿಂದ ಶಿವನಪ್ಪನೇ ಚಿಗಟೇರಿ ಕೋಟೆಗೆ ಅರಸನೆಂದು ಸಾರಿ ಆಜ್ಞೆಯನ್ನು ಕಳಿಸಿದನು. (ಈ ಜೂಜಾಟದ ವಿಚಾರಕ್ಕೆ ಆಧಾರಗಳಿಲ್ಲ. ಇದೆಲ್ಲಾ ಜನರ ಬಾಯಿಮಾತುಗಳಲ್ಲಿ ಕೇಳಿ ಬರುತ್ತದೆ.*)

ಹೀಗೆ ಅರಸನಾದ ಶಿವನಪ್ಪನು ಹರಪನಹಳ್ಳಿ ಅರಸರಿಗೆ ವಿಧೇಯನಾಗಿ ಚಿಗಟೇರಿ ಕೋಟೆಯನ್ನು ಕೆಲಕಾಲ ಆಳಿದನು.[1] ಚಿಗಟೇರಿಯಲ್ಲಿ ಆಗ ಚಿಕ್ಕೇರಿ ಕೆರೆ ; ಹಿರೇಕೆರೆ ಎಂಬುವ ಹೆಸರಿನ ಎರಡು ಕೆರೆಗಳು ಇದ್ದವು. ಅವು ಆಗ ಮಣ್ಣಿನಿಂದ ಹೂತು ಹೋಗಿದ್ದವು. ಶಿವನಪ್ಪನಾಯಕನು ಚಿಗಟೇರಿಯ ಗುಡ್ಡದ ಪಕ್ಕದಲ್ಲಿ ಒಂದು ಕೆರೆಯನ್ನು ಊರಲ್ಲಿ ಒಂದು ಬಾವಿಯನ್ನು ನಿರ್ಮಿಸಿದನು. ಇವುಗಳಿಗೂ ನೀರು ಹೆಚ್ಚು ಸಂಗ್ರಹವಾಗಲಿಲ್ಲ. ಆಗ ತಾನು ಕಟ್ಟಿಸಿದ ಕೆರೆಗೆ ಹರಪನಹಳ್ಳಿ ಪಟ್ಟಣದ ಪಶ್ಚಿಮ ಭಾಗದ ಕುಂಚೂರು ಹಲುವಾಗಲು ಬಳಿ ಹರಿದಿರುವ ತುಂಗಭದ್ರಾ ನದಿ ನೀರನ್ನು ನದಿಗೆ ಅಣೆಕಟ್ಟು ರಚಿಸಿ ನೀರು ಒದಗಿಸಲು ಪ್ರಯತ್ನಿಸಿದನು. ತುಂಗಭದ್ರಾ ನದಿಯ ಪ್ರದೇಶದ ಮಟ್ಟಕ್ಕಿಂತ ಹರಪನಹಳ್ಳಿ ಪುರವನ್ನು

* ಶಿವನಪ್ಪನಾಯಕರ ಸಂಬಂಧಿ (ವಂಶಸ್ಥರು) ಭಂಗಿ ಮುನಿಯಪ್ಪನ ಹೇಳಿಕೆ

1 ಚಿಗಟೇರಿ ಶಿವನಪ್ಪನಾಯಕ ಚಿಗಟೇರಿಯನ್ನಾಳಿದನು. ಅವನು ಹರಪನಹಳ್ಳಿ ಅರಸರ ಸಾಮಂತ ಮತ್ತು ಅವನ ಕಾಲ ಶಾ.ಶ. ೧೬೩೦, ಕ್ರಿ.ಶ. ೧೭೦೮

ಸೇರುವ ಚಿಗಟೇರಿಗೆ ಬರುವ ಪ್ರದೇಶ ಎತ್ತರವಾಗಿದ್ದುದರಿಂದ ಶಿವನಪ್ಪನ ಯೋಜನೆ ವಿಫಲವಾಯಿತು.

ಹರಪನಹಳ್ಳಿ ಅರಸನಾದ ಮೊದಲ ಬಸವಂತ ನಾಯಕ ಅಥವಾ ಮುಮ್ಮಡಿ ಬಸಪ್ಪ ನಾಯಕ, ಈತನ ಆಜ್ಞೆಯ ಮೇರೆಗೆ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿ ದುರ್ಗದ ಶ್ರೀ ಉಚ್ಚಂಗಮ್ಮ ದೇವತೆಗೆ ಒಂದು ಹಿತ್ತಾಳೆ ಗಂಟೆಯನ್ನು ನಿರ್ಮಿಸಿಕೊಟ್ಟಿರುವರು.

ಹರಪನಹಳ್ಳಿಗೆ ಸುಮಾರು ೮ ಕಿಲೋಮೀಟರ್ ದೂರವಿರುವ ಬಾಗಳಿ ಗ್ರಾಮದಲ್ಲಿ ಪ್ರತಿವರ್ಷವೂ ಗೋಣಿ ಬಸವಪ್ಪನ ಜಾತ್ರೆ ಜರುಗುತ್ತದೆ. ಈ ಜಾತ್ರಾ ಸಮಯದಲ್ಲಿ ವಿಶ್ವಕಲಾ ಯುವಕ ರೈತ ನಾಟ್ಯ ಸಂಘ ಬಾಗಳಿಯವರು ಒಂದು ನಾಟಕವನ್ನು ಆಡುವರು. ಆ ನಾಟಕದ ಹೆಸರು ಶ್ರೀ ಗೋಣಿಬಸವೇಶ್ವರ. ಅದರಲ್ಲಿ ಶಿವನಪ್ಪನ ಪಾತ್ರ ಕಾಣುವುದು. ಶಿವನಪ್ಪ ಸಾಧು ಗೋಣಿಬಸಪ್ಪನನ್ನು ಹಿಂಸಿಸುವುದು ; ಗೋಣಿಬಸಪ್ಪನು ಅವುಗಳಿಂದ ಪಾರಾಗುವ ಸನ್ನಿವೇಶಗಳಿವೆ. ಶಿವನಪ್ಪನ ಪಾತ್ರ ಅತ್ಯಂತ ಕ್ರೂರವಾಗಿ ಕಂಡು ಬರುವುದು.

ಗೋಣಿಬಸಪ್ಪ ಸಾಧುವನ್ನು ಶಿವನಪ್ಪನಾಯಕ ಒಂದು ವೇಳೆ ದ್ವೇಷಿಸಿರಬಹುದು ; ಆದರೆ ಅದು ಅವನ ವೈಯಕ್ತಿಕ ವಿಚಾರವಾಗುತ್ತದೆ. ಶಿವನಪ್ಪನಾಯಕ ತನ್ನ ಆಡಳಿತ ಕಾಲದಲ್ಲಿ ಅನೇಕ ಜನಹಿತ ಕಾರ್ಯಗಳನ್ನು ಮಾಡಿರುವನು. ದೇವರಲ್ಲಿ ಮತ್ತು ತನ್ನ ಒಡೆಯರಾದ ಹರಪನಹಳ್ಳಿಯ ಅರಸರಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡಿದ್ದನೆಂದು ತಿಳಿದು ಬರುವುದು. ಅದಕ್ಕಾಗಿಯೇ ಹರಪನಹಳ್ಳಿಯ ಅರಸರು ಅವನಿಗೆ ಕುಮಾರ ಶಿವನಪ್ಪನೆಂದು ಕರೆದಿರುವನು.

ಮೇಲಿನ ಕೆಲವು ಅಂಶಗಳನ್ನು ನಾವು ಗಮನಿಸಿದರೆ ಈಗಲೂ ಕಣ್ಣಿಗೆ ಕಾಣುವ ಶಿವನಪ್ಪನ ಕೆರೆ, ಬಾವಿ, ಗಂಟೆಗಳನ್ನು ನೋಡಿದರೆ ಶಿವನಪ್ಪನು ಕೆಟ್ಟವನೆಂದು ಹೇಳಬಹುದೆ ?

O